## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 27 (138) |
| ಮಾನ್ಯ ಸದಸ್ಯರ ಹೆಸರು | : | ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 08-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯ ಮಡಿಕೇರಿ ನಗರ ಸಭೆಯ ವ್ಯಾಪ್ತಿಯಲ್ಲಿ ಪ್ರತಿದಿನ ಉತ್ಪಾದನೆಯಾಗುತ್ತಿರುವ ತ್ಯಾಜದ ಪ್ರಮಾಣವೆಷ್ಟು? | ಮಡಿಕೇರಿ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿದಿನ ಸರಾಸರಿ 23 ಟನ್ ತ್ಯಾಜ್ಯ ಉತ್ಪಾದನೆಯಾಗುತ್ತಿದೆ. ಪ್ರವಾಸಿಗರು ನಗರಕ್ಕೆ ಹೆಚ್ಚು ಆಗಮಿಸುವ ಕಾಲದಲ್ಲಿ ತ್ಯಾಜ್ಯ ಉತ್ಪಾದನೆಯ ಪ್ರಮಾಣದಲ್ಲಿ ಸ್ವಲ್ಪಮಟ್ಟಿಗೆ ವ್ಯತ್ಯಾಸವಿರುವ ಸಾಧ್ಯತೆಗಳಿರುತ್ತದೆ. |
| ಆ | ಈ ತ್ಯಾಜ್ಯವನ್ನು ವೈಜ್ಞಾನಿಕವಾಗಿ ವಿಲೇವಾರಿ ಮಾಡಲಾಗುತ್ತಿದೆಯೇ (ವಿವರ ನೀಡುವುದು) | ಹಾಲಿ ನಗರ ವ್ಯಾಪ್ತಿಯಲ್ಲಿ ಪ್ರತಿದಿನ 23 ಟನ್ ತ್ಯಾಜ್ಯ ಸಂಗ್ರಹವಾಗುತ್ತಿದ್ದು, ಮಡಿಕೇರಿಯ ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1P16 ರಲ್ಲಿ 6 ಎಕರೆ ಸಂಸ್ಕರಣೆ ಜಾಗದಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪಡೆದಿರುವ ಅಧಿಕೃತ ಪತ್ರವನ್ನು ಅನುಸರಿಸಿ ತ್ಯಾಜ್ಯ ವಿಲೇವಾರಿಯನ್ನು ಮಾಡಲು ಕ್ರಮವಹಿಸಲಾಗುತ್ತಿದೆ.<br>• ಸದರಿ ಜಾಗದಲ್ಲಿ ಈಗಾಗಲೇ Watchmen shed, Electricity connection, Bore well, 8 compost pits of 1 ton capacity each, Trammel screen 4mm, Conveyor belt, Dry waste store room, Compost store room ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸಲಾಗಿರುತ್ತದೆ.<br>• ಹಾಲಿ ಲಭ್ಯವಿರುವ 8 Compost pits ಗಳಲ್ಲಿ ಹಸಿ ತ್ಯಾಜ್ಯವನ್ನು ಪರಿಣಾಮಕಾರಿಯಾಗಿ ಸಂಸ್ಕರಣೆ ಮಾಡುವ ಸಲುವಾಗಿ ಏರಿಯೇಷನ್ ಹಾಗೂ ಲೀಚೆಟ್ ಕಲೆಕ್ಷನ್ ಸಿಸ್ಟಮ್ ಅಭಿವೃದ್ಧಿ ಪಡಿಸುವ ಕಾಮಗಾರಿಗಳು ಚಾಲನೆಯಲ್ಲಿರುತ್ತದೆ.<br>• ನಗರಸಭೆ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುವ ತ್ಯಾಜ್ಯವನ್ನು ಮೂಲದಲ್ಲಿಯೇ ವಿಂಗಡಿಸಿ ವಿಕೇಂದ್ರೀಕೃತ ಸಂಸ್ಕರಣೆ ಮಾಡಲು ನಗರಸಭಾ ವ್ಯಾಪ್ತಿಯಲ್ಲಿ ಕೆಲವೊಂದು ಸ್ಥಳಗಳನ್ನು ಗುರುತಿಸಲಾಗಿದ್ದು, ವಿವರ ಕೆಳಕಂಡಂತೆ ಇರುತ್ತದೆ.<br>1) ದಾಸವಾಳ ರಸ್ತೆ, ಪಿ.ಐ.ಡಿ ನಂ: 4-1-504-37, ವಿಸ್ತೀರ್ಣ: 125 x 110 ಚದರ ಅಡಿಗಳು<br>2) ಹೆಲ್ತ್ ಕಚೇರಿ ಹತ್ತಿರ: ಪಿ.ಐ.ಡಿ ನಂ 14-3-519-7, ವಿಸ್ತೀರ್ಣ 60 x 40 ಚದರ ಅಡಿಗಳು<br>• ಮೇಲ್ಕಂಡ ಸ್ಥಳಗಳಲ್ಲಿ ಸುಮಾರು 6 ಟನ್‌ಗಳಷ್ಟು ಒಣ ತ್ಯಾಜ್ಯವನ್ನು ಸಂಸ್ಕರಿಸಲು 2 ಶೆಡ್‌ಗಳನ್ನು ರೂ. 30.00 ಲಕ್ಷಗಳ ಅಂದಾಜಿನಲ್ಲಿ ನಿರ್ಮಾಣ ಮಾಡಲು ಯೋಜನೆ ರೂಪಿಸಿ ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ. ಸದರಿ ಘಟಕಗಳಲ್ಲಿ |

| | | |
|---|---|---|
| | | ಬೇಲಿಂಗ್ ಯಂತ್ರ ಹಾಗೂ ಮಾನವ ಸಂಪನ್ಮೂಲಗಳನ್ನು ಬಳಸಿಕೊಂಡು ಒಣತ್ಯಾಜ್ಯ ಸಂಸ್ಕರಣೆ ಮಾಡಲು ಉದ್ದೇಶಿಸಲಾಗಿದೆ.<br>• ತ್ಯಾಜ್ಯವನ್ನು ವಿಕೇಂದ್ರಿತವಾಗಿ ಸಂಸ್ಕರಣೆ ಮಾಡುವ ಉದ್ದೇಶದಿಂದ ಹಸಿ ತ್ಯಾಜ್ಯವನ್ನು ಮೂಲದಲ್ಲಿಯೇ ಸಂಸ್ಕರಿಸಲು ಸಾರ್ವಜನಿಕರಲ್ಲಿ ಹೋಂ ಕಾಂಪೋಸ್ಟಿಂಗ್ / ಸಮುದಾಯ ಕಾಂಪೋಸ್ಟಿಂಗ್‌ನ್ನು ಅಳವಡಿಸಿಕೊಳ್ಳುವಂತೆ ಹೆಚ್ಚಿನ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>• 8 ರಿಂದ 10 ಟನ್ ಹಸಿತ್ಯಾಜ್ಯವನ್ನು Compost pits ಗಳಲ್ಲಿ ಕೊಳೆಸಿ ಗೊಬ್ಬರವಾಗಿ ಪರಿವರ್ತಿಸಲು ಕ್ರಮವಹಿಸಲಾಗುತ್ತಿದೆ.<br>• 10 ರಿಂದ 13 ಟನ್ ಒಣ ತ್ಯಾಜ್ಯವನ್ನು ಪ್ರತ್ಯೇಕವಾಗಿ ಸಂಗ್ರಹಿಸಿ, ಪ್ಲಾಸ್ಟಿಕ್ ತ್ಯಾಜ್ಯವನ್ನು ಬೇಲ್ ಮಾಡಿ ಹತ್ತಿರದ ಪುನರ್ಬಳಕೆದಾರರಿಗೆ ನೀಡಲು ಕ್ರಮವಹಿಸಲಾಗಿದೆ.<br>• ಪೌರಕಾರ್ಮಿಕರಿಗೆ ಹಾಗೂ ಸಾರ್ವಜನಿಕರಿಗೆ ತ್ಯಾಜ್ಯವನ್ನು ಮೂಲದಲ್ಲಿಯೇ ವಿಂಗಡಣೆ ಮಾಡುವ ಕುರಿತಾಗಿ ತರಬೇತಿ ನೀಡಲಾಗಿದೆ.<br>• ಘನತ್ಯಾಜ್ಯ ವಸ್ತುಗಳ ನಿರ್ವಹಣೆ ನಿಯಮಗಳು 2016, ರೀತ್ಯಾ ಘನತ್ಯಾಜ್ಯವನ್ನು ವೈಜ್ಞಾನಿಕವಾಗಿ ಸಂಸ್ಕರಿಸಿ ವಿಲೇವಾರಿ ಮಾಡಲು ಎಲ್ಲಾ ಅಗತ್ಯ ಕ್ರಮವಹಿಸಲಾಗುತ್ತಿದೆ. |
| ಇ | ಮಡಿಕೇರಿ ನಗರ ಸಭೆಗೆ ತ್ಯಾಜ್ಯವನ್ನು ವೈಜ್ಞಾನಿಕವಾಗಿ ವಿಲೇವಾರಿ ಮಾಡುವ ವಿವಿಧ ಯೋಜನೆಗಳ ಮೂಲಕ ಕಳೆದ ಮೂರು ವರ್ಷಗಳಿಂದ ಬಂದಿರುವ ಅನುದಾನವೆಷ್ಟು | ಮಡಿಕೇರಿ ನಗರಸಭೆಗೆ ತ್ಯಾಜ್ಯವನ್ನು ವೈಜ್ಞಾನಿಕವಾಗಿ ವಿಲೇವಾರಿ ಮಾಡಲು ವಿವಿಧ ಯೋಜನೆಗಳ ಮೂಲಕ ಕಳೆದ ಮೂರು ವರ್ಷಗಳಿಂದ ಬಂದಿರುವ ಅನುದಾನದ ವಿವರ:<br>• 2020-21ನೇ ಸಾಲಿನಲ್ಲಿ IEC ಚಟುವಟಿಕೆಗಾಗಿ ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>• 2020-21ನೇ ಸಾಲಿನಲ್ಲಿ 15th General Basic Grant ಅಡಿ ರೂ. 50.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>• 2019-20ನೇ ಸಾಲಿನಲ್ಲಿ 14th General Basic Grant ಅಡಿ ರೂ 41.80 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>• 2018-19ನೇ ಸಾಲಿನಲ್ಲಿ 15th General Basic Grant ಅಡಿ ರೂ 31.40 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>• 2019-20ನೇ ಸಾಲಿನಲ್ಲಿ ಎಸ್.ಬಿ.ಎಂ ಯೋಜನೆಯಡಿ ರೂ 98.05 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. |
| ಈ | ತ್ಯಾಜ್ಯವನ್ನು ವೈಜ್ಞಾನಿಕವಾಗಿ ವಿಲೇವಾರಿ ಮಾಡಲು ಶಾಶ್ವತ ಯೋಜನೆ ಇದುವರೆಗೂ ಅನುಷ್ಠಾನಗೊಳ್ಳದಿರಲು ಕಾರಣಗಳೇನು? | • 2017 ಸಾಲಿನಲ್ಲಿ ಸ್ವಚ್ಛ ಭಾರತ ಮಿಷನ್ ಅಡಿ ತ್ಯಾಜ್ಯ ಸಂಗ್ರಹಣೆ ಅಗತ್ಯವಿರುವ ವಾಹನಗಳ ಹಾಗೂ ತ್ಯಾಜ್ಯ ಸಂಸ್ಕರಣೆಗೆ ಅಗತ್ಯ ಸೌಲಭ್ಯಗಳನ್ನು ಒಳಗೊಂಡ (Windrow Platform, Processing Shed, Sanitary Landfill, Leachate Treatment Unit, Internal Roads) ರೂ. 561.11 ಲಕ್ಷಗಳ ಬಂಡವಾಳ ಮೊತ್ತದ ವಿಸ್ತೃತ ಯೋಜನಾ ವರದಿಯನ್ನು ಸಿದ್ಧಪಡಿಸಿದ್ದು, ಸರ್ಕಾರವು ಅನುಮೋದನೆ ನೀಡಿದ್ದು, ರೂ 98.05 ಲಕ್ಷಗಳ ಅನುದಾನ ಬಿಡುಗಡೆ |

| | | |
|---|---|---|
| | | ಮಾಡಲಾಗಿದೆ.<br>• ತ್ಯಾಜ್ಯ ಸಂಸ್ಕರಣೆ ಜಾಗದಲ್ಲಿ ಹಳೆಯ ತ್ಯಾಜ್ಯದ ರಾಶಿಯಿರುವುದರಿಂದ ಸಿವಿಲ್ ಕಾಮಗಾರಿಗಳನ್ನು ಸದರಿ ಸ್ಥಳದಲ್ಲಿ ಕೈಗೊಳ್ಳಲು ಕಷ್ಟಸಾಧ್ಯವಾಗಿರುತ್ತದೆ. ಆದುದರಿಂದ ಪಾರಂಪರಿಕ ತ್ಯಾಜ್ಯ ನಿರ್ವಹಣೆಗಾಗಿ ಎಕ್ಸ್‌ಪ್ರೆಷನ್ ಆಫ್ ಇಂಟರೆಸ್ಟ್ (EOI) ಅನ್ನು ದಿನಾಂಕ: 27-11-2020 ರಂದು ಆಹ್ವಾನಿಸಲಾಗಿರುತ್ತದೆ.<br>• ಈ ಮದ್ಯೆ ಘನತ್ಯಾಜ್ಯ ವಿಲೇವಾರಿ ಕುರಿತು ಮಾನ್ಯ ಉಚ್ಛ ನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅರ್ಜಿ ಸಂಖ್ಯೆ: 48/2020 ಎಸ್.ಆರ್.ವಿ.ಕೆ. ವೆಲ್‌ಫೇರ್ ಅಸೋಸಿಯೇಷನ್, ಕೊಡಗು V/S ಕರ್ನಾಟಕ ಸರ್ಕಾರ ಮತ್ತು ಇತರರ ವಿರುದ್ಧ ಪ್ರಕರಣ ದಾಖಲಾಗಿದ್ದು, ಪ್ರಕರಣವು ವಿಚಾರಣೆಯ ಹಂತದಲ್ಲಿರುತ್ತದೆ.<br>• ಮಡಿಕೇರಿ ನಗರಸಭೆ ಘನತ್ಯಾಜ್ಯ ನಿರ್ವಹಣೆ ಬಗ್ಗೆ ಸ್ಥಳ ಪರಿಶೀಲನೆ ನಡೆಸಿ, ಸೂಕ್ತ ತಾಂತ್ರಿಕ ಸಲಹೆ, ಅಭಿಪ್ರಾಯ ನೀಡಲು ಪೌರಾಡಳಿತ ನಿರ್ದೇಶನಾಲಯದಿಂದ M/S SAAHAS ಏಜನ್ಸಿಯನ್ನು ನಿಯೋಜಿಸಿರುತ್ತದೆ. ಸದರಿ ಏಜನ್ಸಿಯು ನೀಡಿರುವ ವರದಿಯ ರೀತ್ಯಾ ಮಡಿಕೇರಿ ನಗರವು Ecologically Sensitive Zone ವಲಯದಲ್ಲಿದ್ದು, ಪ್ರಸ್ತುತ ತ್ಯಾಜ್ಯ ವಿಲೇವಾರಿ ಮಾಡುತ್ತಿರುವ ಸ್ಯಾನಿಟರಿ ನೆಲಭರ್ತಿ ಜಾಗವು ಎತ್ತರದ ಪ್ರದೇಶದಲ್ಲಿರುತ್ತದೆ. ಘನತ್ಯಾಜ್ಯ ನಿರ್ವಹಣೆ ನಿಯಮಗಳು 2016 ರೀತ್ಯಾ ಸೂಕ್ತವಿಲ್ಲದಿರುವುದರಿಂದ ಪರ್ಯಾಯ ಜಾಗ ಗುರುತಿಸಿ ವೈಜ್ಞಾನಿಕವಾಗಿ ಅಭಿವೃದ್ಧಿ ಪಡಿಸಲು ತಿಳಿಸಲಾಗಿರುತ್ತದೆ.<br>• ಅದರ ರೀತ್ಯಾ ನಗರದಲ್ಲಿ ಸೂಕ್ತ ಪ್ರದೇಶವನ್ನು ಗುರುತಿಸಿ, ಪ್ರಸ್ತಾವನೆಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ನಗರಸಭೆಗೆ ಸೂಚನೆ ನೀಡಲಾಗಿರುತ್ತದೆ.<br>• ನಗರಸಭೆಯು ಬದಲಿ ಸ್ಥಳವನ್ನು ಗುರುತಿಸಿ, ಸದರಿ ಸ್ಥಳಕ್ಕೆ ಅನುಗುಣವಾಗಿ ಪರಿಷ್ಕೃತ ವಿಸ್ತೃತ ಯೋಜನಾ ವರದಿಯನ್ನು ಸಿದ್ಧಪಡಿಸಿ ಘನತ್ಯಾಜ್ಯ ವಿಲೇವಾರಿ ಘಟಕವನ್ನು ಅಭಿವೃದ್ಧಿಪಡಿಸಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ನಅಇ 321 ಸಿಎಸ್ಎಸ್ 2020

(ಡಾ॥ ನಾರಾಯಣಗೌಡ)
ಮಾನ್ಯ ಪೌರಾಡಳಿತ ಹಾಗೂ
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.